# ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್:114
5ನೇವರ್ಷ 35ನೇ ಸಂಚಿಕೆ ಕೊಪ್ಪ 24-5-1987 ಭಾನುವಾರ ಬೆಲೆ 50 ಪೈಸೆ




## ಫಲಾನುಭವಿಗಳ ಆಸಕ್ತಿ, ಮತ್ತೆಲ್ಲರ ನಿರ್ಲಕ್ಷ್ಯ:
# ವಿಫಲತೆಯ ಅಂಚಿನಲ್ಲಿ ಹಂದಿ ಸಾಕಣೆ ಕೇಂದ್ರ

(ವರದಿ: ಕಲ್ಕುಳಿ ವಿಠಲ ಹೆಗ್ಡೆ).

**ಶೃಂಗೇರಿ: ದಕ್ಷಿಣ ಭಾರತದಲ್ಲಿಯೇ ಪ್ರಥಮ ಎಂಬಲ್ಲಿಂದ ಆರಂಭವಾಗಿ 'ಇಡೀ ವಿಶ್ವದಲ್ಲೇ ಪ್ರಪ್ರಥಮವಂತೆ' ಎಂಬಲ್ಲಿಯವರೆಗಿನ ಪ್ರಶಂಸೆ-ಖ್ಯಾತಿಗಳಿಗೆ ಕೇವಲ ಒಂದು ವರ್ಷದ ಹಿಂದಷ್ಟೇ ಪಾತ್ರವಾಗಿದ್ದ, ನೆಮ್ಮಾರಿನ 'ಸುಧಾರಿತ ತಳಿ ಹಂದಿ ಸಾಕಣೆಯ ಸಾಮೂಹಿಕ ಕೇಂದ್ರ'ವು ಇಂದು ಸಂಬಂಧಪಟ್ಟ ಅಧಿಕಾರಿಗಳ ನಿರ್ಲಕ್ಷ್ಯಕ್ಕೊಳಗಾಗಿ ವಿಫಲವಾಗುವ ಅಂಚಿನಲ್ಲಿದೆ.**

ಈ ಕೇಂದ್ರದ ಹಣಕಾಸಿನಲ್ಲಿ ಕೆಲವು ಸಾವಿರ ರೂಪಾಯಿಗಳ ಏರುಪೇರು ಆಗಿರುವುದೊಂದು ಕಡೆಯಾದರೆ, ಇನ್ನೊಂದು ಕಡೆ ಮರಿ ಸಾಕಣೆ ವ್ಯವಸ್ಥೆಗಳು ಅಸ್ತವ್ಯಸ್ತವಾಗಿವೆ. ಅಂತಿಮವಾಗಿ ಈ ಯೋಜನೆಯನ್ನೇ ಕೊನೆಗೊಳಿಸುವ ಸಲಹೆ ಕೂಡ ಸ್ಥಳೀಯ ಗ್ರಾಮೀಣ ಬ್ಯಾಂಕ್ ಮ್ಯಾನೇಜರಿಂದ ಮುಖ್ಯ ಕಚೇರಿಗೆ ಹೋಗಿದೆ.

ಕಳೆದ ಏಪ್ರಿಲ್ 4 ರಂದು (1986) ನೆಮ್ಮಾರಿನ ಸಮೀಪದ ಹೊಸ್ಕೆರೆ (ಹೊಸ ಕೇರಿ)ಯಲ್ಲಿ ಆಗಿನ ಸಚಿವರಾಗಿದ್ದ ಗೋವಿಂದ ಗೌಡರನ್ನೂ ಇತರ ಅತಿಥಿಗಳನ್ನೂ ಸ್ಥಳೀಯ ಬಡ ಜನ ಉತ್ಸಾಹದಿಂದ ಕೊಂಬು ಕಹಳೆಗಳೊಂದಿಗೆ ಅಮೋಘವಾಗಿ ಸ್ವಾಗತಿಸಿ, ಈ ಸಾಮೂಹಿಕ ಕೇಂದ್ರದ ಉದ್ಘಾಟನೆ ಅದ್ದೂರಿಯಾಗಿ ನಡೆದಿತ್ತು.

'ಇದು ರಾಜ್ಯಕ್ಕೇ ಮಾದರಿ' ಎಂದ ಗೌಡರು, ತಾನು ಹೋದೆಡೆಯಲ್ಲೆಲ್ಲ ಇಂಥ ಉಪಯುಕ್ತ ಯೋಜನೆಗಳಿಗೆ ಪ್ರೇರಣೆ ನೀಡುವುದಾಗಿ ಹೇಳಿದರೆ, ಕಚ್ಚೋಡಿ ಶ್ರೀನಿವಾಸ್, "ಇದು ಹೊಸ್ಕೆರೆ ದಲಿತರಿಗೆ ಸುವರ್ಣ ದಿನ" ಎಂದಿದ್ದರು. ಈ ಯೋಜನೆಗೆ ಸಾಲ ಒದಗಿಸಿದ ಗ್ರಾಮೀಣ ಬ್ಯಾಂಕಿನ ಅಧ್ಯಕ್ಷ ಅಚ್ಯುತ ಪೈ, "ಈ ಯೋಜನೆಯಿಂದಾಗಿ ಇನ್ನೆರಡು ವರ್ಷದಲ್ಲಿ ಫಲಾನುಭವಿ ಮಹಿಳೆಯರ ಕೈಗಳಲ್ಲಿ ಚಿನ್ನದ ಬಳೆ ಕಾಣುವುದು ಸತ್ಯ" ಎಂದಿದ್ದರು.

ಆದರೆ ಇಂದು, ಆ ಸಾಲದ ವಸೂಲಿಗಾಗಿ ಸದ್ಯ ಕೈ ಕೋಳವೊಂದು ಬರದಿದ್ದರೆ ಅದೇ ಪುಣ್ಯ ಎಂಬಂತಾಗಿದೆ ಅವರುಗಳಿಗೆ!

ಆಗಿನ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಾಗಿದ್ದ ವೆಂಕಟೇಶ ಪ್ರಸಾದ್ ಎಂಬ ಪ್ರಜ್ಞಾವಂತ ದಲಿತ ಅಧಿಕಾರಿಯ ಕಲ್ಪನೆ, ಕಾರ್ಯಶೀಲತೆಗಳಿಂದ ರೂಪುಗೊಂಡು, ತಾ. ಅ. ಮಂಡಳಿಯ ಜೂನಿಯರ್ ಇಂಜಿನಿಯರ್ ರತ್ನಾಕರ್ ಅವರ ಸಮರ್ಥ ಉಸ್ತುವಾರಿಯಲ್ಲಿ ಅಚ್ಚುಕಟ್ಟಾಗಿ ಸಜ್ಜುಗೊಳಿಸಲ್ಪಟ್ಟ ಈ ಕೇಂದ್ರವಲ್ಲಿ "ದ್ವಾಕ್ರಾ" ಯೋಜನೆಯಡಿ 16 ಮಂದಿ ದಲಿತಮಹಿಳೆಯರಿಗೆ ತಲಾ 3 ರಂತೆ ಸುಧಾರಿತ ತಳಿಯ ಹಂದಿ ಮರಿಗಳನ್ನು ಒದಗಿಸಲಾಗಿತ್ತು.

ಏಪ್ರಿಲ್‌ನಿಂದ ಆಗಸ್ಟ್‌ವರೆಗಿನ ಕೇವಲ 4 ತಿಂಗಳಲ್ಲಿ ದಷ್ಟಪುಷ್ಟವಾಗಿ ಬೆಳೆದಿದ್ದ ಈ ಹಂದಿಗಳನ್ನೂ, ಅವುಗಳ ಪಾಲನೆ-ಪೋಷಣೆ, ಆಹಾರ-ಆರೈಕೆಗಳ ಬಗ್ಗೆ ಫಲಾನುಭವಿ ಕುಟುಂಬಗಳವರು ಹೊಂದಿದ್ದ ತೀವ್ರ ಆಸಕ್ತಿ ಮತ್ತು ಸ್ಪಷ್ಟ ತಿಳುವಳಿಕೆಗಳನ್ನೂ ಬೆಂಗಳೂರಿನಿಂದ ಬಂದಿದ್ದ ದೊಡ್ಡ ಪತ್ರಿಕೆಗಳ ಪತ್ರಕರ್ತರ ಒಂದು ತಂಡ ಪ್ರತ್ಯಕ್ಷ ಕಂಡು ಮೂಗಿನ ಮೇಲೆ ಬೆರಳಿಟ್ಟಿತ್ತು.

**ಗ್ರಾಮಾಭಿವೃದ್ಧಿ ಕಾರ್ಯಕ್ರಮಕ್ಕೊಂದು ಮಾದರಿ ಎಂಬಂತೆ ಈ ಕೇಂದ್ರ ರೂಪುಗೊಂಡಿತ್ತು.** (3ನೇ ಪುಟಕ್ಕೆ)

# ಶೃಂಗೇರಿಯಲ್ಲಿ 'ತಾಳಿಭಾಗ್ಯ' ಸಮಾರಂಭ

(ನಮ್ಮ ಪ್ರತಿನಿಧಿಯಿಂದ)

ಶೃಂಗೇರಿ: ಇಲ್ಲಿನ ಕಂದಾಯ ಇಲಾಖೆ ನೇತೃತ್ವದಲ್ಲಿ 18 ಜೊತೆ ಸಾಮೂಹಿಕ ವಿವಾಹಗಳ 'ತಾಳಿಭಾಗ್ಯ' ಸಮಾರಂಭ ಕಚ್ಚೋಡಿ ಶ್ರೀನಿವಾಸ್ ಅಧ್ಯಕ್ಷತೆಯಲ್ಲಿ ನಡೆಯಿತು. ಗೋವಿಂದಗೌಡ ಮತ್ತು ಕೆ. ವಿ. ರಾಮಪ್ಪಯ್ಯ ಮುಖ್ಯ ಅತಿಥಿಗಳಾಗಿದ್ದರು.

ಶಾಸಕರು ಮಾತನಾಡುತ್ತ, ಎಲ್ಲ ಜೋಡಿಗಳೂ ಹರಿಜನರೇ ಆಗಿರುವುದನ್ನು ಗಮನಿಸಿ, ಎಲ್ಲ ಬಡವರೂ ಈ ಸೌಲಭ್ಯ ಪಡೆದುಕೊಳ್ಳುವಂತೆ ಕರೆ ನೀಡಿದರು. ಅತಿ ಕಿರಿಯ ವಯಸ್ಸಿನ ಜೋಡಿಗಳನ್ನು ಆರಿಸಿರುವ ಬಗ್ಗೆ ಆಕ್ಷೇಪ ವ್ಯಕ್ತಪಡಿಸುತ್ತಾ ಕಡೇ ಪಕ್ಷ 20 ವರ್ಷಕ್ಕೆ ಮೇಲ್ಪಟ್ಟವರನ್ನು ಆರಿಸಬೇಕೆಂದು ಸೂಚಿಸಿದರು. ಕುಟುಂಬ ನಿಯಂತ್ರಣಕ್ಕೆ ಕರೆ ನೀಡಿದರು.

**ಜನಬಲಕ್ಕೆ ಪೈಪೋಟಿ!**

ರಾಮಪ್ಪಯ್ಯ ಮಾತನಾಡುತ್ತ, 'ಬಡವರು ಮದುವೆಗಾಗಿ ಸಾಲದಲ್ಲಿ ಸಿಕ್ಕಿಕೊಳ್ಳುವುದನ್ನು ತಪ್ಪಿಸಲು ರಾಜ್ಯ ಸರ್ಕಾರ ಈ ಯೋಜನೆ ಜಾರಿಗೆ ತಂದಿದೆ' ಎಂದು ಶಾಸಕರು ಹೇಳಿದ್ದನ್ನು ಬದಿಗೆ ಸರಿಸುವ ರೀತಿಯಲ್ಲಿ, "ಇಂದಿರಾ ಗಾಂಧಿಯವರೇ, 20 ಅಂಶ ಕಾರ್ಯಕ್ರಮದಲ್ಲಿ ಇಂಥ ಯೋಜನೆಗಳಿಗೆ ಒತ್ತು ಕೊಟ್ಟಿದ್ದರು" ಎಂದರು.

ಅಂತೂ ಈ ಇಬ್ಬರೂ ಆಡಳಿತ ನಾಯಕರು ಚುನಾವಣಾ ಭಾಷಣದಂತೆ ಈ ಸಂದರ್ಭದಲ್ಲಿ ತಮ್ಮ ತಮ್ಮ ಘನಂದಾರಿ ಕೆಲಸಗಳನ್ನು ಹೇಳಿಕೊಂಡು ತಮಗೆ ಜನಬಲ ಎಲ್ಲಿ ಕಡಿಮೆಯಾಗುತ್ತದೊ ಎಂಬ ಹವಣಿಕೆಯಲ್ಲಿದ್ದರು!

**ಹಾಸ್ಯಾಸ್ಪದ ವಿವಾಹ ವಿಧಿ**

ವಿವಾಹ ವಿಧಿ ನೆರವೇರಿಸಿದ ಟಿ. ಎಂ. ಬಾಲಗಣಪತಿ ಈ ಸಂದರ್ಭಕ್ಕೆಂದೇ ಲೌಕಿಕ-ರಾಜಕೀಯ ಮಿಶ್ರಿತವಾದ, ಆದರೆ ಸಂಪ್ರದಾಯಬದ್ಧವೆನ್ನುವಂತೆ ಕಾಣುವ, ಸಂಸ್ಕೃತ ಬೆರಕೆಯಾದ 'ಮಂತ್ರ'ಗಳನ್ನು ಸೃಷ್ಟಿ ಮಾಡಿ ಪ್ರಯೋಗಿಸಿದರು. ಇದನ್ನು ಅತಿಥಿಗಳು ಮತ್ತು ಕೆಲ ಮಂದಿ ಕಟ್ಟಾ ಸಂಪ್ರದಾಯವಾದಿಗಳು (!) ಬಹುವಾಗಿ ಮೆಚ್ಚಿ ಚಪ್ಪರಿಸಿದರೂ, ನೋಡುವವರಿಗೆ ಮಾತ್ರ ಬಹಳ ಹಾಸ್ಯಾಸ್ಪದವಾದ ಸರ್ಕಸ್ಸಿನಂತೆ ಕಂಡುಬರುತ್ತಿತ್ತು.

ಆದರೂ ಸುಮಾರು 800 ಜನಕ್ಕೆ ಊಟದ ವ್ಯವಸ್ಥೆ ಮಾಡಿದ್ದು ಮೆಚ್ಚುಗೆ ಗಳಿಸಿತು.

# ಜಾದೂಗಾರ ಪಿ. ಸಿ. ಸರ್ಕಾರ್ v/s ಸಾಯಿಬಾಬಾ

ದೇವರ ಅವತಾರವೆಂದೇ ಹೇಳಿಕೊಳ್ಳುವ 'ಭಗವಾನ್' 'ಸತ್ಯ' ಸಾಯಿಬಾಬಾರ ಬದುಕಿನಲ್ಲಿ ಒಂದು ದುರ್ದಿನ. ಅದೂ ಅವರು ಪ್ರಪಂಚದಾದ್ಯಂತ ಭಕ್ತ ವೃಂದದಿಂದ ಆರಾಧಿಸಲ್ಪಡುತ್ತಿದ್ದ ಸುವರ್ಣಕಾಲದಲ್ಲೇ. ಅದು ನಡೆದದ್ದು ಹೀಗೆ–

ಬಾಬಾರ 'ಸಂದೇಶ'ಕ್ಕಾಗಿ ಭಕ್ತರು ನೆರೆದಿದ್ದರು. ಅವರು ದರ್ಶನ ಕೊಟ್ಟ ಕೂಡಲೆ ತರೆಗೆಲೆಗಳಂತೆ ಅವರ ಕಾಲಿಗೆರಗಿ ಪುನೀತರಾದರು. ಈ ಗುಂಪಿನಲ್ಲಿ 'ಜಹರ್' ಎಂಬ ನಿಗೂಢ ವ್ಯಕ್ತಿಯೂ ಅಡಗಿದ್ದ. ಬಾಬಾ ತನ್ನ ಮುಂದೆ ಬಂದ ಕೂಡಲೇ ಆತನೂ ಕಾಲಿಗೆರಗಿದ.

ಈ ಮುಂಚೆ ಆತ ಬಾಬಾರನ್ನು ಸಂಧಿಸಲು ಹಲವು ಬಾರಿ ಪ್ರಯತ್ನಿಸಿದ್ದ. ಪ್ರತಿ ಸಾರಿ ಪ್ರಯತ್ನಿಸಿದಾಗಲೂ ಅನುಮತಿ ನಿರಾಕರಿಸಲಾಗಿತ್ತು. ಕೊನೆಗೆ ಆತ ತನ್ನ ಅಡ್ಡ ಹೆಸರನ್ನು ನಮೂದಿಸಿ ಪ್ರವೇಶ ದೊರಕಿಸಿಕೊಂಡಿದ್ದ. ಆತನನ್ನು ಸಂದರ್ಶಕರ ಸಭಾಂಗಣದಲ್ಲಿ ಕೂರಿಸಲಾಯಿತು. ಅದೃಷ್ಟಕ್ಕೆ ಆತನ ಪಕ್ಕದಲ್ಲಿ ಮಹಿಳೆಯೊಬ್ಬಳು ಕುಳಿತಿದ್ದಳು. ಆಕೆ ಪೂಜಾ ತಟ್ಟೆಯಲ್ಲಿ ರಸಗುಲ್ಲಾಗಳನ್ನು ತಂದಿದ್ದಳು.

ಈತ ಅನಾಯಾಸವಾಗಿ ಒಂದು ರಸಗುಲ್ಲಾ ಕದ್ದು ಜೇಬಿಗಿಳಿಬಿಟ್ಟ.

ಇದೀಗ 'ಭಗವಾನ'ರ ಕಾಲಿಗೆ ಬೀಳುವಾಗಲೂ ಆ ರಸಗುಲ್ಲಾ ಭದ್ರವಾಗಿದೆಯೋ ಇಲ್ಲವೋ ನೋಡಿಕೊಂಡ. ದರ್ಶನ ಮುಗಿಯಿತು ಇನ್ನು 'ಭಗವಾನ'ರಿಂದ ಪವಾಡ ಪ್ರದರ್ಶನ, 'ಪ್ರಸಾದ' ವಿತರಣೆ.

ಬಾಬಾ ಗಾಳಿಯಲ್ಲಿ ಕೈ ಆಡಿಸಿದರು. ಒಂದಾದ ಮೇಲೊಂದು ವಸ್ತುಗಳನ್ನು ತೆಗೆದು ಭಕ್ತರಿಗೆ ಹಂಚಿದರು. 'ಜಹರ್' ಸರದಿ ಬಂತು. ಬಾಬಾ ಕೈ ಆಡಿಸಿ ಕೊಡಲು ಹೋದ ವಸ್ತುವನ್ನು ನೋಡಿದ್ದೇ ಅದನ್ನು ನಿರಾಕರಿಸಿ, "ಕ್ಷಮಿಸಿ, ನನಗೆ ರಸಗುಲ್ಲಾ ಮಾತ್ರ ಇಷ್ಟ" ಎಂದ. ತಾನೇ ಗಾಳಿಯಲ್ಲಿ ಬರಿಗೈ ಆಡಿಸಿ ರಸಗುಲ್ಲಾ ತರಿಸಿ ಬಾಬಾರ ಮುಂದೆ ಹಿಡಿದ.

ಒಂದು ಕ್ಷಣ 'ಭಗವಾನ್' ದಿಗ್ಭ್ರಾಂತರಾದರು. ಭಕ್ತವೃಂದದಲ್ಲಿ ಅಲ್ಲೋಲ ಕಲ್ಲೋಲ. 'ಇವನನ್ನು ಹೊರ ಹಾಕಿ' ಎಂದು ಬಾಬಾ ಸಹಾಯಕರನ್ನು ಕೂಗಿ ಕರೆದು 'ಜಹರ್'ನನ್ನು ಹೀನಾಮಾನ ಬೈಯತೊಡಗಿದರು.

ಆಗ ಆ ವ್ಯಕ್ತಿ ತನ್ನ ಗುರುತು ಹೇಳಿದ. ನಾನೇ ಪಿ. ಸಿ. ಸರ್ಕಾರ್ ಎಂದು ಘೋಷಿಸಿದ. 'ನಾವಿಬ್ಬರೂ ಮಾಡುವುದು ಒಂದೇ ಕೆಲಸ. ಸ್ವಲ್ಪ ಮಾತ್ರ ವ್ಯತ್ಯಾಸ ನಾನು ಕೇವಲ ನಟನಾಗಿ ಜಾದೂ ಮಾಡುವೆ. ನೀನೋ ಖೊಟ್ಟಿ ದೇವರ ಪಾತ್ರವನ್ನು ಮಾಡುತ್ತಿರುವೆ' ಎಂದು ಮೂದಲಿಸಿ ಆ ಸಭಾಂಗಣದಿಂದ ಹೊರ ನಡೆದ. ಯಾರೂ ಆತನ ಮೈ ಮುಟ್ಟುವ ಧೈರ್ಯ ಮಾಡಲಿಲ್ಲ.

ಸರ್ಕಾರ್ ಸಾಯಿಬಾಬಾ ಅನುಸರಿಸುವ ತಂತ್ರವನ್ನು ಬಯಲಿಗಿಟ್ಟರು. ಮುಂಗೈಗೆ ಎಲಾಸ್ಟಿಕ್ ದಾರ ಕಟ್ಟಿಕೊಳ್ಳುವುದು. ಅದರ ಇನ್ನೊಂದು ತುದಿಗೆ ಒಂದು ರಬ್ಬರ್ ಚೆಂಡು ಸಿಗಿಸುವುದು. ಚೆಂಡಿಗೆ ತೂತು ಮಾಡಿ ವಿಭೂತಿ ತುಂಬುವುದು ಅದು ಮುಚ್ಚಿಕೊಳ್ಳುವಂತೆ ನಿಲುವಂಗಿ ಧರಿಸುವುದು. ಬೇಕಾದಾಗ ಚೆಂಡನ್ನು ಸ್ವಲ್ಪ ಅಮುಕಿದರೂ ಸಾಕು ವಿಭೂತಿ ಹೊರ ಚೆಲ್ಲುತ್ತದೆ. ಇದನ್ನು ಸಾಯಿಬಾಬಾ ಮಾತ್ರವಲ್ಲ ಸ್ವಲ್ಪ ಕೈಚಳಕ ಅಭ್ಯಾಸ ಮಾಡಿದ ಯಾರು ಬೇಕಾದರೂ ಮಾಡಬಹುದು ಎಂದು ಘೋಷಿಸಿದ. ಹಾಗೆಯೇ ನಿಲುವಂಗಿಯಲ್ಲಿ ಬಚ್ಚಿಟ್ಟುಕೊಳ್ಳುವ ಸಣ್ಣಪುಟ್ಟ ವಸ್ತುಗಳನ್ನೂ ಬರಿಸಬಹುದು ಎನ್ನುತ್ತಾರೆ ಸರ್ಕಾರ್.

ಸಾಯಿಬಾಬಾ ಪಟದಿಂದ ವಿಭೂತಿ ಉದುರುವ ಪವಾಡಕ್ಕೆ ಅವರು ಕೊಡುವ ವಿವರಣೆ ಇದು:

ಯಾವುದೋ ಪಟಕ್ಕೆ ಶುದ್ಧ ಹೈಡ್ರೋಕ್ಲೋರಿಕ್ ಆಮ್ಲ ಸವರಿದರೆ ಸಾಕು, ಅದು ಸ್ಫಟಿಕ ಸ್ವಚ್ಛವಾಗಿರುವುದರಿಂದ ಗೊತ್ತೇ ಆಗುವುದಿಲ್ಲ. ಭಕ್ತ ಆ ಪಟದ ಮುಂದೆ ಊದುಬತ್ತಿ ಹಚ್ಚುತ್ತಾನೆ. ಆಗ ಅಪರೂಪಕ್ಕೆ ಅಮೋನಿಯಾ ಉತ್ಪತ್ತಿಯಾಗುತ್ತದೆ. ಇದು ಗಾಳಿಯಲ್ಲಿನ ತೇವಾಂಶ ಹಾಗೂ ಗಾಜಿನ ಮೇಲಿನ ಹೈಡ್ರೋಕ್ಲೋರಿಕ್ ಆಮ್ಲದ ಜತೆ ವರ್ತಿಸಿ ಅಮೋನಿಯಂ ಕ್ಲೋರೈಡ್ ಎಂಬ ಸೀಮೆ ಸುಣ್ಣದ ಪುಡಿಯಂತಿರುವ ವಸ್ತು ಉತ್ಪತ್ತಿಯಾಗುತ್ತದೆ. ಭಕ್ತರು ಇದನ್ನೇ ಪವಾಡ ಎಂದು ಪರಿಗಣಿಸುತ್ತಾರೆ.

"ಇದು ಪವಾಡವೇ ನಿಜವಾದರೆ ರಾಮ, ಸೀತ ಮುಂತಾದ ದೇವರ ಪಟಗಳಿಂದ ಯಾಕೆ ವಿಭೂತಿ ಉದುರುವುದಿಲ್ಲ?" ಎಂದು ಕೇಳುವ ಸರ್ಕಾರ್ ತಾವೇ ಉತ್ತರವನ್ನೂ ಹೇಳುತ್ತಾರೆ. "ಯಾಕೆಂದರೆ ರಾಮ ಸೀತೆಯರಿಗೆ ಹೈಡ್ರೋಕ್ಲೋರಿಕ್ ಆಮ್ಲ ಹಚ್ಚುವಷ್ಟು ಧೈರ್ಯವುಳ್ಳ ಬಾಡಿಗೆ ಏಜೆಂಟರಿರುವುದಿಲ್ಲ ಅದಕ್ಕೆ" ಎನ್ನುತ್ತಾರೆ.

ಇಷ್ಟಾದರೂ ಜನ ಸಾಯಿಬಾಬಾರನ್ನು ನಂಬುವುದನ್ನು ಕಂಡು ಸರ್ಕಾರ್ ಮರುಗುತ್ತಾರೆ. **ಜನರ ಮಾನಸಿಕ ಕ್ಲೇಶವನ್ನು ದುರುಪಯೋಗಪಡಿಸಿಕೊಳ್ಳುವ ಖೊಟ್ಟಿ ದೇವಮಾನವರ** ವಿರುದ್ಧ ಅವರದು ಖಡಾಖಂಡಿತವಾದ ಹೋರಾಟ.

(ಸೌಜನ್ಯ : ಸುದ್ದಿ ಸಂಗಾತಿ)

# ಕಾರ್ಮಿಕರ, ಮಾಲೀಕರ ಮನೋಭಾವಗಳ ಎರಡು ಮಾದರಿಗಳು

ಮಲೆನಾಡಿನ ಬಹು ದೊಡ್ಡ ಸಾರಿಗೆ ಸಂಸ್ಥೆ ಎಂಬ ಹೆಗ್ಗಳಿಕೆಯ ಶಂಕರ್ ಕಂಪೆನಿಯಲ್ಲಿ ಕಾರ್ಮಿಕ ವಿವಾದ ಆರಂಭವಾಗಿ ಒಂದು ವರ್ಷವಾಗುತ್ತ ಬಂದಿದೆ. ಈ ಅವಧಿಯಲ್ಲಿ ಕಾರ್ಮಿಕರ ಯಾವುದೇ ಪ್ರಮುಖ ಬೇಡಿಕೆಯೂ ಈಡೇರಿಲ್ಲವಾದರೂ, ಎಲ್ಲಾ ಮೂರ್ಖ ಬಂಡವಾಳಗಾರರಂತೆಯೇ ಈ ಕಂಪೆನಿಯ ಮಾಲೀಕರೂ ಸಹ ತಮ್ಮೆಲ್ಲ ದುರ್ಬುದ್ಧಿ ಶಕ್ತಿಯನ್ನೂ ಅಪಾರ ಹಣವನ್ನೂ ವ್ಯಯಿಸಿ ಅದಷ್ಟೂ ಕಿರುಕುಳ ಕೊಟ್ಟು ಅವರ ಸಂಘವನ್ನೂ ಒಗ್ಗಟ್ಟನ್ನು ಮುರಿಯಲು ಮಾತ್ರ ಹೆಣಗಾಡಿದ್ದಾರೆ; ವಿಫಲರೂ ಆಗಿದ್ದಾರೆ.

ಇಂಥ ಪರಿಸ್ಥಿತಿಯಲ್ಲೂ 'ತಮ್ಮ ಕಂಪೆನಿ'ಯ ಬಗ್ಗೆ ಕಾರ್ಮಿಕರ ಮನೋಧರ್ಮವನ್ನೂ ಬಿಂಬಿಸುವ ಒಂದೆರಡು ಸಂಗತಿಗಳು ಇಲ್ಲಿವೆ.

ಕಳೆದವಾರದ ಒಂದು ದಿನ. ಕಿಗ್ಗದಿಂದ ಕೊಪ್ಪಕ್ಕೆ ಬರುವ ಬಸ್ಸೇ ಆ ಮಾರ್ಗದ ಎಲ್ಲಾ ಹಳ್ಳಿಗಳವರಿಗೆ 'ಕೊನೇ ಗಾಡಿ'. ಹಾಗಾಗಿ ಶೃಂಗೇರಿಯಲ್ಲಿ ವಿಪರೀತ ಜನ ಸಂದಣಿ. ಸಾಲದ್ದಕ್ಕೆ ಕಂಡಕ್ಟರ್ ಬೇರೆ ಹೊಸಬ. ಬಸ್ಸಿಗೆ ಹತ್ತಿದವರು ತಾವಾಗಿಯೇ ಮುಂದೆ ಬಂದು ಬೇರೆಯವರಿಗೆ ಒಳಬರಲು ಅವಕಾಶವನ್ನೂ ಮಾಡಿಕೊಡರು. ಒಳಗಿದ್ದವರು ಆಗಲೇ "ಎಷ್ಟು ತುಂಬುತ್ತೀರ್ರೀ ? ರೈಟ್ ಕೊಡ್ರೀ" ಎಂದು ಗಲಾಟೆಗೆ ತೊಡಗಿದ್ದಾರೆ. ಬಸ್ ಆಗಲೇ ಟೋಲ್ ಗೇಟ್ ಹೊರಗಿನ ಸ್ಟಾಂಡಿನಲ್ಲಿ ಬಂದು ನಿಂತಾಗಿದೆ.

ಹತ್ತಾರು ಜನರನ್ನು ಬಿಟ್ಟು ಹೋಗುವ ಪರಿಸ್ಥಿತಿ. ಇದರಿಂದ ಪ್ರಯಾಣಿಕರಿಗೂ ತೊಂದರೆ, ಕಂಪೆನಿಗೂ ನಷ್ಟ. (ಕಂಡಕ್ಟರಿಗೆ ಅದೇ ಕ್ಷೇಮ !)

ಆಗ–ಎಲ್ಲಿದ್ದರೋ ಒಬ್ಬ ವ್ಯಕ್ತಿ ಡ್ರೈವರ್ ಕಡೆಯಿಂದ ಬಸ್‌ನೊಳಗೆ ಹತ್ತಿ ಜನರನ್ನೆಲ್ಲ ಸ್ವಲ್ಪ ಜೋರುಮಾಡಿ ಮುಂದೆ ಮುಂದೆ ನಿಲ್ಲಿಸತೊಡಗಿದರು. ಹತ್ತು ನಿಮಿಷದೊಳಗೆ ಅಲ್ಲಿ ಕಾದಿದ್ದ ಎಲ್ಲರಿಗೂ ಬಸ್ ಹತ್ತಿಸಿ, ಟಿಕೇಟ್ ಕೊಡುವುದಕ್ಕೂ ಸಹಾಯ ಮಾಡಿ 'ರೈಟ್' ಕೊಡಿಸಿದರು.

ಅವರೇ ಕಾರ್ಮಿಕ ಸಂಘದ ಉಪಾಧ್ಯಕ್ಷ, ಡ್ರೈವರ್ ಚಂದ್ರಶೇಖರ್. ಎಲ್ಲರ ಪ್ರೀತಿಯ 'ಬಿ. ಟಿ. ಚಂದ್ರು.' ಪರಿಸ್ಥಿತಿಯ ಅರಿವಿದ್ದ ಅವರು ಜನರ, ಕಂಪೆನಿಯ ಮತ್ತು ತನ್ನ ಸಹೋದ್ಯೋಗಿಯ (ಆತ ಇನ್ನೂ ಸಂಘಕ್ಕೆ ಸದಸ್ಯನಾಗಿಲ್ಲದೆಯೂ ಇರಬಹುದು) ಹಿತಕ್ಕಾಗಿ ಬೇರೆಲ್ಲ ವೈಮನಸ್ಯದ ಅಂಶಗಳನ್ನೂ ಬದಿಗೊತ್ತಿ, ತನ್ನ ಬಿಡುವಿನ ಅವಧಿಯನ್ನು ಹೀಗೆ ಧಾರೆಯೆರೆದಿದ್ದರು. (ಮೇಲಿನ ಸ್ಟಾಂಡಿನಿಂದ ಟೋಲ್‌ಗೇಟ್ ಸ್ಟಾಂಡಿಗೆ ಅದ್ಯಾವ ಮಾಯಕದಲ್ಲಿ ಬಂದಿದ್ದರೋ !)

ಇದೇ ರೀತಿ, ಒಬ್ಬ ಕಂಡಕ್ಟರನ ಬಗ್ಗೆ ಹಳ್ಳಿಯ ಪ್ರಜ್ಞಾವಂತರೊಬ್ಬರು ಹೇಳಿದ್ದ ಒಂದು ಸಂದರ್ಭ ಹೀಗಿದೆ.

ಭದ್ರಾವತಿ–ಉಡುಪಿ ಮಿನಿ ಬಸ್‌ನ ಕಂಡಕ್ಟರ್ ಆತ. (ಮಾಲೀಕರ ಒತ್ತಡ ತಾಳಲಾರದೆ ಆತ ಕಾರ್ಮಿಕರ ಸಂಘ ಬಿಟ್ಟು ಚಮಚಾ ಸಂಘ ಸೇರಿದ್ದಾನೆನ್ನುವುದು ಬೇರೆ ಮಾತು. ಇರಲಿ) ಎಷ್ಟೇ ರಶ್ ಇರಲಿ, ಏನೇ ಸಮಸ್ಯೆಯಿರಲಿ, ಆತ ಯಾವತ್ತೂ ಮುಖ ಗಂಟಿಕ್ಕಿದ್ದು ನೋಡಿಲ್ಲ. ಪ್ರಯಾಣಿಕರ ಜೊತೆ ಅತ್ಯಂತ ಸೌಜನ್ಯದಿಂದ ವರ್ತಿಸುತ್ತ, ವೃದ್ಧರು, ಕಾಯಿಲೆಯವರು, ಮಕ್ಕಳನ್ನು ಎತ್ತಿಕೊಂಡವರು ಅಥವಾ ಬಸುರಿ–ಬಾಣಂತಿಯರು ಬಸ್ ಹತ್ತಿದರೆ ಹೇಗಾದರೂ ಮಾಡಿ ಅವರಿಗೆ ಕೂರಲು ಸ್ವಲ್ಪ ಸ್ಥಳಾವಕಾಶ ಮಾಡಿ ಕೊಡುತ್ತ ತಾನು ಇಡೀ ಪ್ರಯಾಣದುದ್ದಕ್ಕೂ ನಿಂತೇ ಸಾಗುತ್ತಾನೆ. ಅಂಥವರ ಬಸ್ಸಿನಲ್ಲಿ ಪ್ರಯಾಣಿಸುವಾಗ, ಎಷ್ಟೇ ಕಷ್ಟವಿದ್ದರೂ

(3ನೆ ಪುಟಕ್ಕೆ)

## ಸಾರ್ಥಕ, ತುಂಬು ಬದುಕು ಬಾಳಿದ

# ಮೇಲ್ಪಾಲು ವೆಂಕಟರಮಣಯ್ಯ

ದಿನಾಂಕ 13–5–87 ರಂದು ನಿಧನರಾದ ಮೇಲ್ಪಾಲಿನ ಶ್ರೀ ಕೆ.ಟಿ. ವೆಂಕಟರಮಣಯ್ಯ ತಮ್ಮ ತುಂಬು ಬದುಕಿನುದ್ದಕ್ಕೂ ಸಮಾಜದ ಏಳಿಗೆಗಾಗಿ ಶ್ರಮಿಸಿದ ಸಾರ್ಥಕ ಜೀವಿ 60 ವರ್ಷದ ಹಿಂದೆ ಅವರು ಮೇಲ್ಪಾಲಿಗೆ ಬಂದು ನೆಲೆಸಿದಾಗ 'ಅಯ್ಯೋ, ಯಾಕಾದರೂ ಈ ಊರಿಗೆ ಬಂದು ನೆಲೆಸಿದೆನಪ್ಪಾ !' ಎಂದು ಒಂದು ಕ್ಷಣ ಕಂಗೆಟ್ಟವರು. ಆಗ ಕೊಪ್ಪದಿಂದ ಈ ಊರಿಗೆ ಒಂದು ಕಾಲುದಾರಿ ಮಾತ್ರ ಇತ್ತು. ಶಾಲೆ, ದೀಪ, ಆಸ್ಪತ್ರೆ–ಯಾವ ಸೌಕರ್ಯವೂ ಇರಲಿಲ್ಲ ಊರಿಗೆ ಈ ಹೆಸರೂ ಇರಲಿಲ್ಲ.

ವೆಂಕಟರಮಣಯ್ಯನವರು ಸ್ವಂತ ಖರ್ಚು ಮತ್ತು ಶ್ರಮದಿಂದ ಕೊಪ್ಪದಿಂದ ಈ ಊರಿಗೆ ಒಂದು ಗಾಡಿ ರಸ್ತೆ ನಿರ್ಮಿಸಿದರು. ಊರಿಗ 'ಮೇಲ್ಪಾಲು' ಎಂದು ನಾಮಕರಣ ಮಾಡಿದ್ದೂ ಅವರೇ. ಅನಂತರ ಲೋಕೋಪಯೋಗಿ ಇಲಾಖೆಯ ಕಂಟ್ರಾಕ್ಟದಾರರಾಗಿ, ಕೊಪ್ಪದಿಂದ ಮೇಲ್ಪಾಲು ಮಾರ್ಗವಾಗಿ ಬಾಳೆಹೊನ್ನೂರಿಗೆ ವಾಹನ ಸಂಚಾರಕ್ಕೆ ಯೋಗ್ಯವಾದ 30 ಕಿ. ಮೀ. ಉದ್ದದ ರಸ್ತೆಯನ್ನೂ ಮೇಲ್ಪಾಲು–ಬಾಳೆಹೊನ್ನೂರು ಮಧ್ಯೆ ಒಂದು ಸೇತುವೆಯನ್ನೂ ನಿರ್ಮಿಸಿದರು.

ತಾವೇ ಸ್ವಂತವಾಗಿ ಒಂದು ಶಾಲೆ ಸ್ಥಾಪಿಸಿ, ಉಪಾಧ್ಯಾಯರನ್ನು ನೇಮಿಸಿ, ಅವರಿಗೆ ತಮ್ಮ ಮನೆಯಲ್ಲೇ ಊಟ–ವಸತಿ ಕೊಟ್ಟು ಮಕ್ಕಳ ವಿದ್ಯಾಭ್ಯಾಸಕ್ಕೆ ದಾರಿ ಮಾಡಿದರು. ಕ್ರಮೇಣ ಸರ್ಕಾರ ಒಂದು ಶಾಲಾ ಕಟ್ಟಡ ಕಟ್ಟಿಸಿ, ಅಧ್ಯಾಪಕರನ್ನು ನೇಮಿಸಿತು. ಈಗ 3 ವರ್ಷದಿಂದ ಇಲ್ಲಿ ಪ್ರೌಢಶಾಲೆ ನಡೆಯುತ್ತಿದೆ.

ಸಾರ್ವಜನಿಕ ಜೀವನದಲ್ಲೂ ದುಡಿದ ಶ್ರೀಯುತರು ಪಂಚಾಯತ್ ಬೋರ್ಡ್ ಅಧ್ಯಕ್ಷರಾಗಿ, ಸಹಕಾರ ಸಂಘದ ಅಧ್ಯಕ್ಷರಾಗಿ, ಜಿಲ್ಲಾ ಬೋರ್ಡ್ ಸದಸ್ಯರಾಗಿ ಊರಿನ ಸರ್ವತೋಮುಖ ಏಳಿಗೆಗಾಗಿ ತನ್ನಿಂದಾದಷ್ಟು ಕೊಡುಗೆ ನೀಡಿದರು.

ಹೀಗೆ ಒಂದು ಜೀವಮಾನ ಪೂರ್ತಿ ಎಂಬಂತೆ ಊರಿಗಾಗಿ ಶ್ರಮಿಸಿದ ದಿವಂಗತರಿಗೆ ಊರವರೆಲ್ಲರ ಕೃತಜ್ಞತೆಗಳು ಸಲ್ಲುತ್ತವೆ.

● ಎಂ. ವಿ ಶಂಕರ್.
ಮೇಲ್ಪಾಲು

## ಫಲಾನುಭವಿಗಳ ಆಸಕ್ತಿ, ಮತ್ತೆಲ್ಲರ ನಿರ್ಲಕ್ಷ್ಯ:

# ವಿಫಲತೆಯ ಅಂಚಿನಲ್ಲಿ ಹಂದಿ ಸಾಕಣೆ ಕೇಂದ್ರ

(1ನೇ ಪುಟದಿಂದ)

ಈ ಕೇಂದ್ರದ ಹಣಕಾಸು ಮತ್ತು ಲೆಕ್ಕಪತ್ರಗಳ ಜವಾಬ್ದಾರಿ ಬಿಡಿಒ ಕಚೇರಿಯಲ್ಲಿ ಈ ಕೆಲಸಕ್ಕಾಗಿಯೇ ಇರಬೇಕಾಗಿದ್ದ ಮುಖ್ಯ ಸೇವಕಿ ಇರಲಿಲ್ಲವಾದ್ದರಿಂದ ಅಲ್ಲಿನ ಚಿಕ್ಕಮಗಳೂರು – ಕೊಡಗು ಗ್ರಾಮೀಣ ಬ್ಯಾಂಕ್ ಮ್ಯಾನೇಜರ್‌ದಾಯಿತು. ಒಟ್ಟಾರೆ ಉಸ್ತುವಾರಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳದಾಗಿತ್ತು.

ಕೇಂದ್ರ ಆರಂಭವಾಗಿ ಸ್ವಲ್ಪ ಕಾಲದಲ್ಲಿ ವೆಂಕಟೇಶ ಪ್ರಸಾದ್ ವರ್ಗವಾಗಿ ಓಂಪ್ರಕಾಶ್ ಹೊಸ ಬಿಡಿಒ ಆಗಿ ಬಂದರು ಆದರೂ ಪ್ರಸಾದ್ ಹಾಕಿಕೊಟ್ಟ ದಾರಿಯಲ್ಲಿ, ಫಲಾನುಭವಿಗಳ ಸ್ವಂತ ಆಸಕ್ತಿಯಿಂದಾಗಿ ಕೇಂದ್ರ ಮತ್ತೂ ಕೆಲಕಾಲ ಅಡೆತಡೆಯಿಲ್ಲದೆ ನಡೆಯಿತು

ಆದರೆ ಬಡಬಗ್ಗರ ಬಗ್ಗೆ ನಿಜವಾದ ಕಾಳಜಿಯಿಂದ ಇಂಥದೊಂದು ಕನಸು ಕಂಡು ಅದನ್ನು ನನಸಾಗಿಸ ಹೊರಟವರು ಈಗ ಹತ್ತಿರದಲ್ಲಿ ಇಲ್ಲವಾಗಿದ್ದರು.

ಇಲ್ಲಿದ್ದವರಿಗೆ ಆ ಕನಸಿನ ಕೈಗೂಸನ್ನು ಇನ್ನೂ ಕೆಲಕಾಲ ಸಂರಕ್ಷಣೆ ಮಾಡಿ ತನ್ನ ಕಾಲ ಮೇಲೆ ತಾನು ನಿಲ್ಲುವಂತೆ ಮಾಡುವ ವ್ಯವಧಾನವಾಗಲಿ ಕಾಳಜಿಯಾಗಲಿ ಇರಲಿಲ್ಲ.

ಹೀಗಾಗಿ, ಸಾಲವೋ ಸಬ್ಸಿಡಿಯೋ ರೂಪದಲ್ಲಿ ಆಗಲೇ ಮಂಜೂರಾಗಿದ್ದಷ್ಟು ಹಣವನ್ನು ತಮ್ಮ ಲೆಕ್ಕಾಚಾರದಂತೆ ತಮಗೆ ಸರಿ ಕಂಡ ರೀತಿ (ಮುಖ್ಯವಾಗಿ ಹಂದಿಗಳ ಆಹಾರಕ್ಕೆ) ಮ್ಯಾನೇಜರ್ ಖರ್ಚು ಮಾಡುತ್ತಾ ಹೋದರು. ಇತ್ತ ಹಂದಿಗಳು ಸಾಯುತ್ತಾ ಬಂದವು. ಒಟ್ಟು 48 ಮರಿಗಳ ಪೈಕಿ ಈಗ ಕೇವಲ 19 ಮಾತ್ರ ಉಳಿದಿವೆ. ಉಳಿದ 29 ರಲ್ಲಿ ಬೆನ್ನುಮೂಳೆ ಮುರಿತಕ್ಕೀಡಾದ 4ನ್ನು ಮಾರಿದ್ದು ಬಿಟ್ಟರೆ ಮಿಕ್ಕವೆಲ್ಲ ಸತ್ತು ಹೋಗಿವೆ. (ಕಳೆದ ವರ್ಷ ಬೆಂಗಳೂರಿನ ಪತ್ರಕರ್ತರ ತಂಡ ಭೇಟಿ ಕೊಟ್ಟಿದ್ದಾಗ, ಇಲ್ಲಿನ ಹೊಸ ಪರಿಸರಕ್ಕೆ ಹೊಂದಿಕೊಳ್ಳಲಾಗದೆ 7 ಮರಿಗಳು ಮಾತ್ರ ಸತ್ತಿದ್ದವು.)

ಈಗ ಒಟ್ಟು ಯೋಜನೆಯನ್ನೇ ಮುಕ್ತಾಯಗೊಳಿಸಿ, ಅದೇ ಶೆಡ್ಡುಗಳಲ್ಲಿ ತಲಾ ಎರಡೆರಡು ಮಿಶ್ರತಳಿ ಹಸುಗಳನ್ನು ನೀಡುವ ಹೊಸ 'ಯೋಜನೆ'ಯೊಂದನ್ನು ಮ್ಯಾನೇಜರ್ ಶಿಫಾರ್ಸು ಮಾಡಿ 2 ತಿಂಗಳ ಹಿಂದೆ ತಮ್ಮ ಮೇಲಾಫೀಸಿಗೆ ಕಳಿಸಿದ್ದಾರಂತೆ.

### ಸಂದೇಹಕ್ಕೆಡೆಕೊಡುವ ಅಂಶಗಳು

1. ಯೋಜನೆಯ ಅಂದಾಜು ವೆಚ್ಚ ಒಟ್ಟು 96 ಸಾವಿರ ರೂ.ಗಳಾದರೆ ಇದನ್ನು ಮೀರಿ 12,793 ರೂ. ಹೆಚ್ಚಿಗೆ ಖರ್ಚು ಮಾಡಲಾಗಿದೆ. ಹೀಗೆ ಅಂದಾಜನ್ನು ಮೀರುವ ಬಗ್ಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳನ್ನಾಗಲಿ ಬೇರಾರನ್ನಾಗಲಿ ಕೇಳಿಲ್ಲ. ಫಲಾನುಭವಿಗಳಿಗೂ ತಿಳಿಸಿಲ್ಲ. ಅವರ ಹತ್ತಿರ ಸುಮ್ಮನೆ ಸಹಿ ತೆಗೆದುಕೊಂಡು ಮತ್ತೆ ತಲಾ ಎರಡೆರಡು ಸಾವಿರ ಸಾಲ ಮಂಜೂರು ಮಾಡಿದಂತೆ ಲೆಕ್ಕ ತಯಾರು ಮಾಡಲಾಗಿದೆ. ಸಹಿ ಯಾತಕ್ಕೆಂದು ಕೇಳಿದವರಿಗೆ "ಸಬ್ಸಿಡಿ ಲೆಕ್ಕಾಚಾರಕ್ಕೆ" ಎಂದು ಹೇಳಲಾಗಿದೆಯಂತೆ. ಇಂದಿಗೂ ಈ ಮೊತ್ತ ಪಾಸ್ ಬುಕ್‌ನಲ್ಲಿ ನಮೂದಿಸಿಲ್ಲ.

ಈ ಬಗ್ಗೆ ಕೇಳಿದರೂ ಮ್ಯಾನೇಜರ್ "ಸಬ್ಸಿಡಿ ಹಣ ತಡವಾಗುತ್ತದೆಂದು ಯೋಚಿಸಿ, ಖರ್ಚು ಹೊಂದಾಣಿಸಲು ಹೀಗೆ ಮಾಡಿದೆ. ಅಲ್ಲದೆ ಹಾಗೆ ಹೆಚ್ಚುವರಿ ಸಾಲ ಕೊಡಲು 10 ಸಾವಿರ ರೂ ವರೆಗೂ ನನಗೆ ಅಧಿಕಾರವಿದೆ. ಅದಕ್ಕೆ ಕೊಟ್ಟೆ" ಎನ್ನುತ್ತಾರೆ. ಆದರೆ ವಾಸ್ತವವಾಗಿ ಜುಲೈನಲ್ಲಿ ಹೀಗೆ ಸಾಲದ ಕಡತ ತಯಾರು ಮಾಡುವುದಕ್ಕೆ ಮೊದಲೇ ಸಬ್ಸಿಡಿ ಹಣ ಬಂದು ಜಮೆಯಾಗಿದೆಯಂತೆ.

ಹಾಗಾದರೆ ಯೋಜನೆಯ ಜವಾಬ್ದಾರರಾದ ಬಿಡಿಒಗಾಗಲಿ, ಫಲಾನುಭವಿಗಳಿಗಾಗಲಿ, ತಮ್ಮ ಮೇಲಾಫೀಸಿಗಾಗಲಿ ತಿಳಿಸದೆ ಹೀಗೆ ಮುಗುಂ ಆಗಿ ಮಂಜೂರು ಮಾಡಲು ನಿಜವಾದ ಉದ್ದೇಶ ಬೇರೆಯೇ ಏನೋ ಇರಬಹುದೆಂಬ ಸಂದೇಹ ಮೂಡುತ್ತದೆ.

2. ಹೀಗೆ ಇವರು ಕೊಡುವ ಲೆಕ್ಕದಂತೆ 12,793.52 ರೂ. ಹೆಚ್ಚಿಗೆ ಖರ್ಚಾಗಿದ್ದರೂ, ಪ್ರತಿಯೊಬ್ಬ ಫಲಾನುಭವಿಗಳ ಸಾಲದ ಖಾತೆಗಳಿಂದ ಲೆಕ್ಕ ತೆಗೆದರೆ ಇನ್ನೂ 1613.20 ರೂ. ವ್ಯತ್ಯಾಸ ಬರುತ್ತದೆ.

3 ದಿನಾಂಕ, ಸಹಿ ಇತ್ಯಾದಿಗಳಿಲ್ಲದ, ಕ್ರಮಬದ್ಧವಲ್ಲದ ಹಲವಾರು ಓಚರ್‌ಗಳಿವೆ. ಖರ್ಚು ತೋರಿಸಿರುವುದಕ್ಕೆ ತಕ್ಕಷ್ಟು ಓಚರ್‌ಗಳಿಲ್ಲ. ಒಂದು ಪ್ರಮುಖ ಓಚರಿನಲ್ಲಿ 3125 ರೂ.ಗೆ ಬದಲಾಗಿ 4125 ರೂ. ಎಂದು ಕೂಡಿದ್ದು, ಅದನ್ನು ಹಾಗೇ ಪಾವತಿಸಲಾಗಿದೆ.

4. ಹಂದಿಗಳಿಗೆ ಕೊಡಿಸಿರುವುದೆಂದು ತಯಾರಿಸಲಾಗಿದ್ದ ಔಷಧಿ–ಟಾನಿಕ್ಕುಗಳ ಲೆಕ್ಕದಲ್ಲಿ ಸಹ ದೊಡ್ಡ ಪ್ರಮಾಣದಲ್ಲಿ ವ್ಯತ್ಯಾಸವಿದೆ.(ಇದು 'ರಫ್' ಲೆಕ್ಕ ಎನ್ನುತ್ತಾರೆ ಮ್ಯಾನೇಜರ್.)

5. ಪಾಸ್ ಬುಕ್, ಸಾಲದ ಪುಸ್ತಕ ಇವುಗಳಲ್ಲೆಲ್ಲ ಲೆಕ್ಕಾಚಾರ ಪೂರ್ಣವಾಗಿ ನಮೂದಾಗಿಲ್ಲ.

ಇವು ಕೆಲವು ಪ್ರಮುಖ ಅಂಶಗಳು. ಒಟ್ಟಿನಲ್ಲಿ ಡ್ರಾ ಮಾಡುವುದು ಆತನೇ, ಖರ್ಚು ಮಾಡುವುದೂ ಆತನೇ ಆಗಿ, ಯಾರೋ ಒಬ್ಬನ ಖಾಸಗಿ ವಹಿವಾಟಿನಂತೆ ಬೇಕಾಬಿಟ್ಟಿಯಾಗಿ ನಡೆದಿರುವುದು ಕಾಣುತ್ತದೆ

### ಬಯಲಾದ ಬಗೆ

ಈ ಯೋಜನೆಯ ಬಗ್ಗೆ ಮೊದಲಿನಿಂದಲೂ ತೀವ್ರ ಆಸಕ್ತಿ ಬೆಳೆಸಿಕೊಂಡಿದ್ದ ಫಲಾನುಭವಿಗಳು ಬಹಳ ಉತ್ಸಾಹದಿಂದಲೇ ಹಂದಿ ಮರಿಗಳನ್ನು ಸಾಕಿದರು. ತಮ್ಮ ಮಕ್ಕಳಿಗೆ ಕೂಡ ವಾರಕ್ಕೊಮ್ಮೆ ಸಾಬೂನು ತಾಗಿಸಲಾರದವರೂ ಸಹ ಈ ಮರಿಗಳಿಗೆ ದಿನಕ್ಕೆರಡು ಬಾರಿ ಸಾಬೂನಿನಿಂದ ಮೈ ತೊಳೆಸುತ್ತಿದ್ದಾರೆ. ಮೊದಲ ಸಾಲ್ಕೈದು ತಿಂಗಳ ಕಾಲ ಹೆಚ್ಚಿನ ಯಾವ ಸಮಸ್ಯೆಯೂ ಕಾಣಲಿಲ್ಲ.

ಆದರೆ ಕಳೆದ ಅಕ್ಟೋಬರಿನಲ್ಲಿ, ಈಗ ಮಂಡಲ ಉಪ ಪ್ರಧಾನರಾಗಿರುವ ಕಾಳಯ್ಯನವರಿಗೆ ಮತ್ತು ಒಬ್ಬಿಬ್ಬರಿಗೆ, ಲೆಕ್ಕವೆಲ್ಲ ಏನೇನಾಗುತ್ತಿದೆ? ಲಾಭವೋ ನಷ್ಟವೋ? ಎಂಬ ಸಂಶಯ ಬಂದು ಮ್ಯಾನೇಜರನ್ನು ಕೇಳಿದರೆ ಯಾವ ಲೆಕ್ಕವೂ ಸಿಕ್ಕಲಿಲ್ಲ. ಅಲ್ಲಿಂದ ಲಿಖಿತ ಮನವಿಯನ್ನು ಮ್ಯಾನೇಜರ್‌ಗೆ, ಬಿಡಿಒಗೆ ಸಲ್ಲಿಸಿ, 20 ಅಂಶದ ಸಭೆಯಲ್ಲೂ ಪ್ರಸ್ತಾಪಕ್ಕೆ ಬಂದು, ಈ ಪತ್ರಕರ್ತನ ಹತ್ತಿರವೂ ದೂರು ಬಂದಾಗ ಬಿಡಿಒರನ್ನು ಕೂಲಂಕಷವಾದ ಲೆಕ್ಕಾಚಾರದ ವಿವರಗಳಿಗಾಗಿ ಕೇಳಲಾಯಿತು. ಆಗ ಅವರು ತನಿಖೆಗೆ ತೊಡಗಿದಾಗ ಲೆಕ್ಕಾಚಾರವೇ ಪೂರ್ಣವಾಗಿಲ್ಲದಿರುವ ಹಾಗೂ ಎಲ್ಲಾ ತರದ ಅಸಂಗತಗಳೂ ಲೋಪ–ದೋಷಗಳೂ ಇರುವುದು ಪತ್ತೆಯಾಯಿತು.

### ಮೇಲಧಿಕಾರಿ ತನಿಖೆ

ಈ ಮಧ್ಯೆ ಬಿಡಿಒರವರ ಮನವಿಯಂತೆ ಚಿ.ಕೊ. ಗ್ರಾಮೀಣ ಬ್ಯಾಂಕಿನ ಮುಖ್ಯ ಕಚೇರಿಯಿಂದ ಒಬ್ಬ ಅಧಿಕಾರಿ ಬಂದು ತನಿಖೆ ಮಾಡಿ, ಅವರ ಲೆಕ್ಕಪತ್ರಗಳಲ್ಲಿ 5ಪೈ. ಮಾತ್ರ ವ್ಯತ್ಯಾಸ ವಿರುವುದೆಂದು ತೀರ್ಮಾನಿಸಿರುವುದಾಗಿಯೂ, ಹೆಚ್ಚುವರಿ ಸಾಲ ನೀಡಿದಂತೆ ಕಾಣಿಸಿರುವುದನ್ನು ಕ್ರಮಬದ್ಧವೆಂದು ಒಪ್ಪಿರುವುದಾಗಿಯೂ ಹೇಳಲಾಗಿದೆ.

ಆದರೆ ಇದೇ ಸಂದರ್ಭದಲ್ಲಿ ಶೃಂಗೇರಿಗೆ ಭೇಟಿ ಕೊಟ್ಟಿದ್ದ ಜಿಲ್ಲಾಪರಿಷತ್ ಕಾರ್ಯದರ್ಶಿ ಪಿ.ಎಸ್.ವಿ. ರಾವ್ ಸಮಗ್ರ ತನಿಖೆಗಾಗಿ ಒಬ್ಬ ಅಧಿಕಾರಿಯನ್ನು ನೇಮಿಸುವುದಾಗಿ ತಿಳಿಸಿದ್ದಾರೆನ್ನಲಾಗಿದೆ. (4ನೇ ಪುಟಕ್ಕೆ)

# ಕಾರ್ಮಿಕರ, ಮಾಲೀಕರ ಮನೋಭಾವಗಳ ಎರಡು ಮಾದರಿಗಳು

(2ನೇ ಪುಟದಿಂದ)

ಮನಸ್ಸಿಗೆ ಒಂದು ಬಗೆಯ ನೆಮ್ಮದಿ ಇರುತ್ತದೆ. ಇಂಥವರ ಬಗ್ಗೆ ಪತ್ರಿಕೆಯಲ್ಲಿ ಪ್ರಕಟಿಸಬೇಕು. ಇನ್ನೂ ನಾಲ್ಕು ಜನರಿಗೆ ಅದರಿಂದ ಉತ್ತೇಜನ ಸಿಕ್ಕುತ್ತದೆ –ಎಂದಿದ್ದರು ಅವರು.

ಇನ್ನು, ಬೇರೆ ಕಂಪೆನಿಯವರ ಜೊತೆ ಪೈಪೋಟಿಯಲ್ಲಿ ಹೊಡೆದಾಟಕ್ಕೆ ಕೂಡ ಸಿದ್ಧವಾಗುವಷ್ಟು ಮಟ್ಟಿಗೆ 'ತಮ್ಮ ಕಂಪೆನಿ'ಯನ್ನು ಹಚ್ಚಿಕೊಂಡಿದ್ದ ಡ್ರೈವರ್–ಕಂಡಕ್ಟರ್‌ಗಳ ಮನೋಭಾವದಲ್ಲಿ ಕೂಡ ಯಾವ ವ್ಯತ್ಯಾಸವೂ ಆಗಿಲ್ಲ. "ಎಷ್ಟು ಸಾಧ್ಯವೋ ಅಷ್ಟೇ ಜನರನ್ನು ಹತ್ತಿಸಿಕೊಂಡು ಹೋಗಿ. ಆಗದಿದ್ದರೆ ಬಿಟ್ಟು ಹೋಗಿ" ಎಂದು ಕಂಪೆನಿಯೇ ಹೇಳಿದರೂ ಇವರು ಹಾಗೆ ಮಾಡುವುದಿಲ್ಲ. (ಇಂಥ ಸೌಜನ್ಯ, ನಿಷ್ಠೆಗಳಿಗೆ ಎಲ್ಲೋ ಒಂದೆರಡು ಅಪವಾದಗಳೂ ಸಿಕ್ಕಬಹುದು ಅಷ್ಟೇ.)

ಇದಕ್ಕೆ ವ್ಯತಿರಿಕ್ತವಾಗಿ, ಕಂಪೆನಿಯ ಮನೋಭಾವ ನೋಡಿ. ಹೋದ ವರ್ಷದ ಮುಷ್ಕರದ ನಂತರ ಆದ 'ಜೆಂಟ್ಲ್‌ಮೆನ್ಸ್ ಅಗ್ರಿಮೆಂಟ್'ನ್ನು ಕ್ಷುಲ್ಲಕವಾದ, ಕಾಮನ್ ಸೆನ್ಸ್ ರಹಿತವಾದ ಕುಂಟು ನೆಪಗಳಿಂದ ಮುರಿದ ಮಾಲೀಕರು ಅನಂತರದ ಇಡೀ ಐದಾರು ತಿಂಗಳು ಕಾರ್ಮಿಕರನ್ನು ಒಡೆದು ತುಳಿಯಲು ತಮ್ಮೆಲ್ಲ ದೈತ್ಯ ಶಕ್ತಿಯನ್ನೂ ಕೇಂದ್ರೀಕರಿಸಿ ಸೋತರು ಆದರೂ ಕಾರ್ಮಿಕರ ಯಾವ ಪ್ರಮುಖ ಅಗತ್ಯವನ್ನೂ ಪೂರೈಸಿಲ್ಲ. ಸಂಬಳ–ಸವಲತ್ತುಗಳ ಹೊಸ ಸಮಗ್ರ ಒಪ್ಪಂದವೊಂದಕ್ಕಾಗಿ ಡಿಮ್ಯಾಂಡ್ಸ್ ಚಾರ್ಟರ್ (ಬೇಡಿಕೆ ಪತ್ರ) ಸಲ್ಲಿಸಿ 2 ತಿಂಗಳ ಮೇಲಾಗಿದ್ದರೂ ಇನ್ನೂ ತಮ್ಮ ಕಡೆಯಿಂದ ಯಾವುದೇ ಸೂತ್ರ ಮುಂದಿಟ್ಟಿಲ್ಲ, ಮಾತುಕತೆಗೂ ಕರೆದಿಲ್ಲ. 'ಅಲ್ಲಿ ಬನ್ನಿ, ಇಲ್ಲಿ ಬನ್ನಿ. ಆಗ ಬನ್ನಿ; ಹೋಗಿ ಬನ್ನಿ' ಎಂಬಂಥ ನೀತಿಯನ್ನು ಅನುಸರಿಸುತ್ತ ಅನಗತ್ಯವಾಗಿ ಕಾರ್ಮಿಕರನ್ನು ರೊಚ್ಚಿಗೆಬ್ಬಿಸುತ್ತಿದ್ದಾರೆ. ಇದರ ಮಧ್ಯೆ, ಎಷ್ಟೋ ವರ್ಷಗಳಿಂದ ನಿಷ್ಠಾವಂತ ದುಡಿಮೆ ಸಲ್ಲಿಸಿರುವ ಕಾರ್ಮಿಕರ ಮೇಲೆ ಕಳವಿನ ಆರೋಪ ಹೊರಿಸಿ ಕಂಪ್ಲೇಂಟ್ ಕೊಡುವ ಮಟ್ಟದ ಕ್ಷುದ್ರತನ ಬೇರೆ. ನಿಜವಾಗಿಯೂ ಕಳವಾಗಿದ್ದರೆ, ಅದಕ್ಕಾಗಿಯೇ ಇರುವ ಬೃಹತ್ ಪಹರೆ ಸಿಬ್ಬಂದಿಯ ಮೇಲೆ ಏನು ಕ್ರಮ ಕೈಗೊಂಡಿದ್ದಾರೆ ಎಂದು ಕಾರ್ಮಿಕರು ಕೇಳುತ್ತಿದ್ದಾರೆ.

ಈ ಎಲ್ಲ ಸತಾಯಿಸುವಿಕೆಯಿಂದ ಬೇಸತ್ತ ಕಾರ್ಮಿಕರು ಇದೀಗ ಜೂನ್ 1 ರಿಂದ ಧರಣಿ, ಉಪವಾಸ ಮುಷ್ಕರಗಳಂಥ ಚಳುವಳಿಯ ಹಾದಿ ಹಿಡಿಯುವ ನಿರ್ಣಯ ತೆಗೆದು ಕೊಂಡಿದ್ದಾರಂತೆ. ಅಂದರೆ ಮತ್ತೊಮ್ಮೆ ಸಂಕಟಗಳ ಸರಮಾಲೆ – ಕಾರ್ಮಿಕರಿಗೂ ಪ್ರಯಾಣಿಕರಿಗೂ ಸಹ.

ಇಂಥ ನಿಷ್ಠಾವಂತ ದುಡಿಮೆಗಾರ ಸಮೂಹವೊಂದರ ಬಗ್ಗೆ ಸಾರ್ವಜನಿಕರು ಸಹ ಸ್ವಲ್ಪ ಕಣ್ಣು ತೆರೆದು ಯೋಚಿಸಬೇಕು ಮಾಲಿಕರು ಸಹ, ತಮ್ಮ ಬಿರುದು–ಬಾವಲಿಗಳು, ಮಾರುತಿ–ಮರ್ಸಿಡಿಸ್‌ಗಳು, ತುಪ್ಪ–ಮೊಸರುಗಳು ಇವೆಲ್ಲಕ್ಕೂ ಮೂಲ ತಮ್ಮ ಕಾರ್ಮಿಕರ ದುಡಿಮೆಯೇ ಹೊರತು ಬರೀ **ಬಂಡವಾಳವನ್ನು ನೆಟ್ಟರೆ ಸಂಪತ್ತು ಮೊಳೆಯುವುದಿಲ್ಲ** ಎಂಬುದನ್ನು ಮನಗಾಣಲೇ ಬೇಕಾಗುತ್ತದೆ. ಕಾರ್ಮಿಕರ ಮೇಲಿನ ದಬ್ಬಾಳಿಕೆಯ ಹಟ ತಮ್ಮದೇ ಮೂಗನ್ನೂ ಮಾನವನ್ನೂ ಮುಕ್ಕಾಗಿಸುತ್ತದೆಯೇ ಹೊರತು, ನ್ಯಾಯ ಸಮ್ಮತವಲ್ಲದ ಹಟ ಎಂದೂ ಎಲ್ಲೂ ಗೆಲ್ಲುವುದಿಲ್ಲ ಎಂಬುದು ಅವರಿಗೆ ಎಷ್ಟು ಬೇಗ ಅರಿವಾದರೆ ಅಷ್ಟು ಅವರಿಗೇ ಕ್ಷೇಮ. 'ನಾವು ಎಷ್ಟೆಂದರೂ ಮಾಲಿಕರು. ಮೂರ್ಖತನವನ್ನು ಹೇಗೆ ಬಿಡಲಿಕ್ಕಾದೀತು ?' ಎಂದು ಅದೇ ದಾರಿ ಹಿಡಿದರೆ ಅದು ಅವರದೇ ಗೋರಿಯ ದಾರಿಯೇ ಹೊರತು ಶ್ರೇಯಸ್ಸಿನ ದಾರಿ ಖಂಡಿತ ಅಲ್ಲ ಎಂದು ಯಾರಾದರೂ ಅವರಿಗೆ ತಿಳಿಹೇಳಿದರೆ ಒಳಿತು.

# ವಿಫಲತೆಯ ಅಂಚಿನಲ್ಲಿ ಹಂದಿ ಸಾಕಣೆ ಕೇಂದ್ರ

(3ನೇ ಪುಟದಿಂದ)

**ಫಲಾನುಭವಿಗಳ ಹೇಳಿಕೆ**

ಭಾಷಣ ಮಾಡುವಾಗ ಹೇಳಿದಷ್ಟು ಬಿಟ್ಟರೆ ತಮಗೆ ಮತ್ತೆ ಯಾವ ವಿಚಾರಗಳೂ ತಿಳಿದಿಲ್ಲವೆನ್ನುವ ಫಲಾನುಭವಿಗಳು, "ಮ್ಯಾನೇಜರ್ ಕೊಡಿಸಿದಷ್ಟೂ ಆಹಾರವನ್ನು ಹಂದಿಗಳಿಗೆ ಹಾಕಿದ್ದೇವೆ. ಮರಿಗಳಿಗೆ ಹುಷಾರಿಲ್ಲದಾಗ ಮಾತ್ರ ಡಾಕ್ಟರ್ ಬಂದು ಹೋಗುತ್ತಿದ್ದರು ಉಳಿದಂತೆ ಲಾಭ–ನಷ್ಟದ ಯಾವ ವಿಚಾರವನ್ನೂ ತಿಳಿಸಿಲ್ಲ. ಪಾಸ್ ಬುಕ್‌ನಲ್ಲಿ, ಏನೂ ಬರೆದಿಲ್ಲ ಸಾಲದ ಪುಸ್ತಕದಲ್ಲಿ ಈ ಗಲಾಟೆ ಶುರುವಾದ ನಂತರ ಮೇವಿನ ಬಗ್ಗೆ ಸ್ವಲ್ಪ ಮಾತ್ರ ಲೆಕ್ಕ ಬರೆದಿದ್ದಾರೆ. ವ್ಯವಹಾರ ಪೂರ್ತಿ ತಾವೇ ಮಾಡುವಂತೆ ಮೊದಲೇ ಎಲ್ಲಾ ದಾಖಲೆಗಳನ್ನು ಮ್ಯಾನೇಜರ್ ತಮ್ಮಿಂದ ಬರೆಸಿಕೊಂಡಿದ್ದರು" ಎನ್ನುತ್ತಾರೆ. ಹಂದಿ ಸಾಕಣೆ ನಿಲ್ಲಿಸಿ ದನ ಕೊಡಿಸುವ ಯೋಜನೆ, ಈಗಾಗಲೇ ಎಲ್ಲ ಕಡೆ ಕುಖ್ಯಾತವಾಗಿರುವಂತೆ ದುಡ್ಡು ನುಂಗುವುದಕ್ಕಿರಬಹುದು ಎಂಬ ಶಂಕೆಯೂ ಕೆಲವರಿಗಿದೆ.

ಅಂತೂ ಈ ಎಲ್ಲಾ ಗೊಂದಲಗಳ ನಡುವೆ, ಈಗ ಉಳಿದಿರುವ ಮರಿಗಳಿಗೆ ಆಹಾರವನ್ನು ಯಾವ ಲೆಕ್ಕದಿಂದ ಕೊಡಿಸಬೇಕೆಂದು ಇತ್ಯರ್ಥವಾಗದೆ, ಫಲಾನುಭವಿಗಳು ತಾವೇ ತೌಡು ಮುಂತಾದುವನ್ನು ತಂದು ತಿನ್ನಿಸುತ್ತಿದ್ದಾರೆ. ಆದರೆ **ಈಗಲೂ ಈ ಯೋಜನೆಯನ್ನು ಎಷ್ಟೇ ಕಷ್ಟವಾದರೂ ಸರಿ, ಮುಂದುವರಿಸಿಕೊಂಡು ಹೋಗುತ್ತೇವೆನ್ನುತ್ತಾರೆ.** ಮರಿಗಳ ಆಹಾರದ ಬಗ್ಗೆ ತಕ್ಷಣ ವ್ಯವಸ್ಥೆಯಾಗಬೇಕಾಗಿದೆ.

ಆದರೆ, ತಮಗೆ ಯಾವ ರೀತಿಯಲ್ಲೂ ಸಂಬಂಧವಿಲ್ಲದಿರುವ ಈ ಹೆಚ್ಚುವರಿ ಖರ್ಚನ್ನಾಗಲಿ, ಮರಿಗಳ ಆಹಾರದ ಖರ್ಚೆಂದು ತೋರಿಸಿದ್ದು ಪೂರ್ಣ ಅಸಮರ್ಪಕ ಲೆಕ್ಕಕೊಟ್ಟಿರುವ 47,367.75 ರೂ. ಗಳನ್ನಾಗಲಿ ತಾವು ಹೊರಲು ಸಿದ್ಧರಿಲ್ಲವೆಂದು ಖಡಾಖಡಿ ಹೇಳುತ್ತಿದ್ದಾರೆ.

**ಬಿಡಿಒ ನಿರ್ಲಕ್ಷ್ಯ**

ಇಷ್ಟೆಲ್ಲ ಏರು ಪೇರು ಆಗುವವರೆಗೂ ಈ ...ೀಜನೆಯ ಆಗು ಹೋಗುಗಳನ್ನು ಸ್ಪಷ್ಟ...ಗಿ ತಿಳಿದುಕೊಳ್ಳಲು ಸರಿಯಾದ ಪ್ರಯ... ಮಾಡದಿರುವ ಕ್ಷೇತ್ರಾಭಿವೃದ್ಧಿ ಅಧಿಕಾ... ...ಂಪ್ರಕಾಶ್ ಅವರ ಕರ್ತವ್ಯದ ನಿರ್ಲ... ...ವನ್ನೂ ಕಡೆಗಣಿಸುವಂತಿಲ್ಲ. 'ದ್ವಾ... ...' ಯೋಜನೆಗಳನ್ನು ನೋಡಿಕೊಳ್ಳ... ...ಇರಬೇಕಾಗಿದ್ದ ಒಬ್ಬ ಮುಖ್ಯ ಸೇವಕಿ ...ಹುದ್ದೆ ಖಾಲಿಯಾಗಿಯೇ ಇದ್ದುದರಿಂದ ...ಗೆ ಸರಿಯಾಗಿ ಗಮನ ಕೊಡಲಾಗಲಿಲ್ಲ ... ಅವರ ಮಾತಿನಲ್ಲಿ ಸ್ವಲ್ಪ ಹುರುಳಿದೆ ...ದರೂ, ಅಧಿಕಾರ ವಹಿಸಿಕೊಂಡು ... ದೀರ್ಘ ಅವಧಿಯಲ್ಲಿ ಒಮ್ಮೆಯಾದ... ...ಮ್ಯಾನೇಜರನ್ನು ಭೇಟಿ ಮಾಡಲಾಗ... ...ೆಂದರೆ ಅವರು ಇಂಥದೊಂದು ಮೂಲ... ...ಕೆಲಸಕ್ಕೆ ಕೊಟ್ಟ ಆದ್ಯತೆ ಎಂಥದು ... ಅರಿವಾಗುತ್ತದೆ.

ಇನ್ನು, ಮರಿ ಕೊಳ್ಳಲೆಂದು ಪ. ಜಾತಿ/ವರ್ಗಗಳ ಕಲ್ಯಾಣ ನಿಧಿಯಿಂದ ಹಿಂದಿನ ಜಿಲ್ಲಾಧಿಕಾರಿಗಳು 23–10–86 ರಲ್ಲಿ ಮಂಜೂರು ಮಾಡಿಸಿದ್ದ 21328 ರೂ. ಹಣ ಹಾಗೇ ಉಳಿದಿರುವುದಕ್ಕೆ ಆಗ ಹಂದಿಗಳಿಗೆ ಯಾವುದೋ ರೋಗ ಬಂದು ಸಾಯುತ್ತಿದ್ದುದರಿಂದ ಪುನಃ ಮರಿಗಳನ್ನು ತರಲಿಲ್ಲ ಎಂಬುದಾಗಿ ಅವರು ನೀಡುವ ಕಾರಣ ತತ್ಕಾಲಕ್ಕೆ ಸರಿಯೆನ್ನಿಸುತ್ತದೆ. ಆದರೆ ಈಗಲಾದರೂ ಆ ಹಣವನ್ನು ಸೂಕ್ತ ರೀತಿಯಲ್ಲಿ ಈ ಯೋಜನೆಗೆ ಬಳಸಿಕೊಳ್ಳಲು ಅವರು ಕ್ರಮ ತೆಗೆದುಕೊಳ್ಳಬೇಕು.

**"ನಾನು ಹಣ ನುಂಗಿಲ್ಲ": ಗ್ರಾಮೀಣ ಬ್ಯಾಂಕ್ ಮ್ಯಾನೇಜರ್**

ಈ ಹಗರಣದ ಕೇಂದ್ರ ಬಿಂದುವಾಗಿರುವ ಚಿಕ್ಕಮಗಳೂರು–ಕೊಡಗು ಗ್ರಾಮೀಣ ಬಾಂಕ್‌ನ ನೆಮ್ಮಾರು ಶಾಖೆಯ ಮ್ಯಾನೇಜರ್ ಅಶೋಕ್ ಕುಮಾರ್ ತನ್ನದೇನೂ ತಪ್ಪಿಲ್ಲವೆಂದು ಸಮರ್ಥಿಸಿಕೊಳ್ಳಲು "ಮುಂಜಾವು" ಕಾರ್ಯಾಲಯಕ್ಕೆ ಬಂದಿದ್ದರು.

ತಾನು ಒಂದು ಪೈಸೆ ಹಣವನ್ನೂ ದುರುಪಯೋಗ ಪಡಿಸಿಕೊಂಡಿಲ್ಲ. ತನಗೆ ಆ ಅಗತ್ಯವೂ ಇಲ್ಲ ಎನ್ನುತ್ತಾರೆ ಅವರು.

ವಿನಾಯಕ ಟ್ರಾನ್ಸ್‌ಪೋರ್ಟ್‌ನವರು ಹಿಂಡಿ, ಬೂಸ ಇತ್ಯಾದಿ ಸರಬರಾಜು ಮಾಡಿದ ಒಂದು ಬಿಲ್‌ನಲ್ಲಿ ಕೂಡುವ ವ್ಯತ್ಯಾಸದಿಂದ 3125 ರೂ ಗೆ ಬದಲು 4125 ಎಂದು ಕೂಡಿದ್ದು, ಎಲ್ಲೋ ಕಣ್ತಪ್ಪಿನಿಂದ ಪಾವತಿಯಾಗಿತ್ತು. ತನಿಖೆಯ ವೇಳೆ ಇದು ಗೊತ್ತಾದಾಗ ಸದರಿ ಅಂಗಡಿಗೆ ಹೋಗಿ ಹೆಚ್ಚುವರಿ ಹಣವನ್ನು ವಾಪ್ಸ ಪಡೆಯಲಾಗಿದೆ. ಅವರ ಬಳಿ ಇದ್ದ ಬಿಲ್‌ನ ಕಾರ್ಬನ್ ಪ್ರತಿಯಲ್ಲೂ 4125 ಎಂತಲೇ ನಮೂದಾಗಿದೆ. ಸುಳ್ಳಾಗಿ ಸೃಷ್ಟಿಸಿದ ಬಿಲ್ ಅಲ್ಲ ಎಂಬುದಕ್ಕೆ ಇದು ಪುರಾವೆ–ಇದು ಅವರ ಒಂದು ವಿವರಣೆ "ಎಷ್ಟೇ ತುರ್ತಿದ್ದರೂ ಇಷ್ಟು ದೊಡ್ಡ ಮೊತ್ತದ ಬಿಲ್ಲನ್ನು ಸರಿಯಾಗಿ ಟೋಟಲ್ ಕೂಡ ಮಾಡದೆ ಪಾವತಿ ಮಾಡಿದ್ದು ಅಜಾಗರೂಕತೆಯಲ್ಲವೆ? ಇಷ್ಟು ಜವಾಬ್ದಾರಿಯ ಹುದ್ದೆ ನಿಮ್ಮಿಂದಾದ ಈ ತಪ್ಪನ್ನು ಕ್ಷಮಿಸುತ್ತದೆಯೆ?" ಎಂದರೆ, "ಏನೊ ತಪ್ಪಾಗಿ ಹೋಯಿತು. ಆದರೆ ಬೇಕೆಂದು ಮಾಡಿದ್ದಲ್ಲ" ಎಂಬ ಒಂದೇ ವಿವರಣೆ.

ಗೋಧಿ ಕೊಂಡಿದ್ದಕ್ಕೆ ಟಿ ಎ.ಪಿ.ಸಿ.ಎಂ.ಎಸ್.ನವರು ಕ್ರಮಬದ್ಧ ರಸೀದಿ ಕೊಟ್ಟಿಲ್ಲ ಏಕೆಂದರೆ ಅದು 'ಕೂಲಿಗಾಗಿ ಕಾಳು' ಯೋಜನೆಗಾಗಿ ಬಂದು ಖರ್ಚಾಗದೆ ಉಳಿದಂಥ ಮಾಲು. ಒಂದೆರಡು ಬಾರಿ ಹೀಗೆ ಮಾಲು ಕೊಂಡು ದುಡ್ಡು ಕೊಟ್ಟಿದ್ದಕ್ಕೆ ಓಚರ್ ಬಂದಿರದಿದ್ದುದನ್ನು ತನಿಖಾಧಿಕಾರಿಯವರೇ ಅಲ್ಲಿ ವಿಚಾರಿಸಿದಾಗ, ಅವರುಗಳು ಒಪ್ಪಿಕೊಂಡು ಬಿಲ್ ಕೊಟ್ಟಿದ್ದಾರೆ–ಇದೊಂದು ವಿವರಣೆ. ಆದರೆ ಟಿಎಪಿಸಿಎಂಎಸ್‌ನವರು ಕೊಟ್ಟ ಬಿಲ್‌ಗಳ ಬಗ್ಗೆ ಯಾರೂ ಆಕ್ಷೇಪಿಸುತ್ತಿಲ್ಲ. ಇಲ್ಲಿ ಪ್ರಶ್ನೆ ಬಂದಿರುವುದು ಬೇರೆ ಕೆಲವು ಅಸಮರ್ಪಕ ಓಚರುಗಳ ಬಗ್ಗೆ.

ಪಾಸ್ ಬುಕ್‌ಗಳು ಸರಬರಾಜು ಆದುದೇ ತೀರ ಇತ್ತೀಚೆಗೆ. ಹಾಗಾಗಿ ಎಂಟ್ರಿ ಇರಲಿಲ್ಲ ಎನ್ನುತ್ತಾರೆ. ಶಾಖೆ ಶುರುವಾಗಿ ಇಷ್ಟು ವರ್ಷವಾದರೂ ಪಾಸ್ ಪುಸ್ತಕಗಳು ಇರಲಿಲ್ಲವೆ?

12 ಸಾವಿರ ರೂ. ಗೂ ಹೆಚ್ಚು ಹಣ ಯೋಜನೆಯ ಅಂದಾಜಿಗಿಂತ ಖರ್ಚಾಗಲು ಕಾರಣ, **ಸಬ್ಸಿಡಿಯನ್ನು ಹೊರತು ಪಡಿ**ಸಿ 6 ಸಾವಿರ ರೂ. ಸಾಲ (ಒಟ್ಟು 8 ಸಾವಿರ) ಎಂದು ತಾನಂದುಕೊಂಡದ್ದು. ಇದನ್ನು ಫಲಾನುಭವಿಗಳಿಗೆ ತಿಳಿಸಿದರೂ ಏನೂ ಪ್ರಯೋಜನವಿಲ್ಲವೆಂದು ತಾನು ತಿಳಿಸಲಿಲ್ಲ. ಈಗ ಅವರುಗಳು ಈ ಹೆಚ್ಚುವರಿ ಹಣಕ್ಕೆ ತಾವು ಬಾಧ್ಯರಲ್ಲ ಎನ್ನುತ್ತಿದ್ದಾರಂತೆ. "ಹಾಗೊಂದು ವೇಳೆ ಅವರು ನಾನೇ ಕಟ್ಟಬೇಕೆಂದು ಬರೆದುಕೊಟ್ಟರೆ ನಾನು ಕೈಯಿಂದ ಕಟ್ಟಲು ಸಿದ್ಧ. ಏಕೆಂದರೆ ಅದು ನನ್ನ ತಪ್ಪು ತಿಳುವಳಿಕೆಯಿಂದ ಆದುದು." ಎನ್ನುತ್ತಾರೆ.

ಆದರೆ ಮೂರರಲ್ಲೊಂದು ಭಾಗ ಸಬ್ಸಿಡಿ ಎಂದು ಗೊತ್ತಿತ್ತಲ್ಲವೆ? ಅಂದಾಜು ಮೀರಬೇಕಾದರೆ ಮೇಲಧಿಕಾರಿಗಳಿಗೂ ಬಿಡಿಒಗೂ ತಿಳಿಸಬೇಕಿತ್ತಲ್ಲವೆ? ಎಂದರೆ "ಹೌದು ಆದರೆ ಇದು ಹಣ ನುಂಗುವುದಕ್ಕಲ್ಲ" ಎಂಬುದು ಅವರ ವಾದ.

**ಇದೇ ಪ್ರಶ್ನೆಗೆ ಇನ್ನೊಂದು ಕಡೆ, "ಸಬ್ಸಿಡಿ ಬರುವುದು ತಡವಾಗುತ್ತೆಂದು–ಕೊಟ್ಟೆ; ಅಧಿಕಾರವಿತ್ತು, ಖರ್ಚು ಸರಿತೂಗಿಸಲು ಕೊಟ್ಟೆ" ಇತ್ಯಾದಿಯಾಗಿ ಹೇಳಿದ್ದಾರೆ. ಯಾವುದು ಸರಿ?**

**ಈ ಯೋಜನೆ ನಷ್ಟದ್ದು?**

ಬಹಳ ಸೂಕ್ಷ್ಮ ತಳಿಯವಾದ ಈ ಮರಿಗಳಿಗೆ ಇಲ್ಲಿನ ಹವೆ ಒಗ್ಗುವುದು ಕಷ್ಟ. ಸ್ವಲ್ಪ ವ್ಯತ್ಯಾಸವಾದರೂ ಸಾಯುವುದು ಅಥವಾ ಬೆನ್ನು ಮೂಳೆ ಮುರಿದುಕೊಳ್ಳುವುದು ಆಗುತ್ತದೆ ಮರಿಗಳಿಗೆ ಹೋಟೆಲ್‌ನ ವಿಸರ್ಜಿತ ಪದಾರ್ಥ ಮುಂತಾದುವನ್ನು ಹೊಟ್ಟೆ ಭರ್ತಿಗೆ ಹಾಕದೆ ಪೌಷ್ಟಿಕ ಆಹಾರವನ್ನೇ ಪೂರ್ತಿಯಾಗಿ ಬಳಸಿದರೆ ಹಂದಿ ಸಾಕಣೆ ಲಾಭದಾಯಕವಾಗಲು ಸಾಧ್ಯವೇ ಇಲ್ಲ. ಹೀಗೆಂದು ಮರಿ ತರುವಾಗಲೇ ಫಾರ್ಮಿನವರೂ ಹೇಳಿದ್ದರು.

ಅಲ್ಲದೆ ಸತ್ತ ಒಂದು ಮರಿಗೆ 300 ರೂ. ಮಾತ್ರ ವಿಮೆ ಬರುತ್ತದೆ. ಆದರೆ ಮೇಲಿನಂತೆ ಐದಾರು ತಿಂಗಳು ಸಾಕಲು 900 ರೂ. ಗೆ ಮೇಲ್ಪಟ್ಟು ಖರ್ಚಾಗಿರುತ್ತದೆ. ಈ ಎಲ್ಲ ಕಾರಣಗಳಿಂದ ಈ ಯೋಜನೆ ಲಾಭದಾಯಕವಲ್ಲ ಎಂಬುದು ಅವರ ಲೆಕ್ಕಾಚಾರ.

**ಕಾಳಜಿ ವಹಿಸಲಿಲ್ಲ**

ನಿಜದಲ್ಲಿ, ಹೋಟೆಲ್ ಮತ್ತು ಹಾಸ್ಟೆಲ್‌ಗಳಿಂದ ವಿಸರ್ಜಿತ ಪದಾರ್ಥಗಳನ್ನು ಒಯ್ಯಲು ಒಂದು ವ್ಯವಸ್ಥೆಯನ್ನು ವೆಂಕಟೇಶ ಪ್ರಸಾದ್ ಯೋಜಿಸಿದ್ದರು. ಆದರೆ ಅನಂತರ ಇವರ್ಯಾರೂ ಅದರ ಬಗ್ಗೆ ಕಾಳಜಿ ವಹಿಸಲೇ ಇಲ್ಲ. 'ಕಾರ್ಯಸಾಧ್ಯವಲ್ಲ' ಎಂದು ತೀರ್ಮಾನಿಸಿ ಬಿಟ್ಟರು. ಬೇರೇನು ಮಾಡಬಹುದು ಎಂದೂ ಯೋಚಿಸಲಿಲ್ಲ.

ಈತನ ಬ್ಯಾಂಕಿನಲ್ಲಿ ಸಿಬ್ಬಂದಿ ಕೊರತೆ, ಕೆಲಸದ ಒತ್ತಡ ಎರಡೂ ಇರುವುದು ನಿಜ. ಆದರೆ ತನ್ನ ಬ್ಯಾಂಕಿನ ಇಂಥ ಒಂದು ಪ್ರತಿಷ್ಠಿತ ಯೋಜನೆಯ ಬಗ್ಗೆ ತಾನು ಪ್ರಥಮ ಆದ್ಯತೆ ನೀಡಲಿಲ್ಲ. ಇದೊಂದು ಕರ್ತವ್ಯ ಲೋಪವೇ ಹೌದು ಎಂದು ಒಪ್ಪುತ್ತಾರೆ.

ಅದರಲ್ಲೂ ಇಷ್ಟು ಸಂಕೀರ್ಣ ಯೋಜನೆ ತೊಡಕುಗಳನ್ನು ಎದುರಿಸುವುದು ಸಹಜ. ಹಂದಿ ಮರಿಗಳಿಗೆ ಯಾರೂ ನಿರೀಕ್ಷಿಸದಿದ್ದ ರೋಗ ಬಂದಿತು. ಹಾಗಾದಾಗ ಸಂಬಂಧಪಟ್ಟವರೊಂದಿಗೆ ಚರ್ಚಿಸಿ, ಒಂದೆರಡು ವರ್ಷವಾದರೂ ಯೋಜನೆ ಮುಂದುವರಿಯುವಂತೆ (ಅನಂತರ ಯೋಜನೆ ತಾನಾಗಿಯೇ ಸುಸೂತ್ರವಾಗಿ ನಡೆದೀತು) ಪ್ರಯತ್ನಿಸದೆ ಅದನ್ನು ಮುಚ್ಚಲು ಶಿಫಾರ್ಸು ಮಾಡಿರುವ ತನ್ನ ಬೇಜವಾಬ್ದಾರಿ ಮತ್ತು ನಿಷ್ಕಾಳಜಿಯನ್ನು ಮಾತ್ರ ಅವರಿಂದ ಅಲ್ಲಗಳೆಯಲಾಗಲಿಲ್ಲ.

**ರಾಜಕೀಯ!**

ಇಷ್ಟೆಲ್ಲದರ ಮೇಲೆ, "ಇದೆಲ್ಲ ರಾಜಕೀಯ. ನನಗೆ ಕಾಂಗ್ರೆಸ್ ಮತ್ತು ಬಿಜೆಪಿ ಒಲವಿದೆ. ಅಲ್ಲಿನ ಕಾಂಗ್ರೆಸ್‌ನ ಕೆಲವರ ಜೊತೆ ಸಂಪರ್ಕವಿತ್ತು. ಜನತಾದವರೊಂದಿಗೆ ಹಾಗಿರಲಿಲ್ಲ. ಅದಕ್ಕಾಗಿ ನನ್ನನ್ನು ವರ್ಗ ಮಾಡಿಸಲು ಇದೆಲ್ಲ ಸೃಷ್ಟಿಸಿದ್ದಾರೆ" ಎಂದು ಈ ಮ್ಯಾನೇಜರ್ ಹೇಳುತ್ತಾರೆ.

ಇಂಥ ಹುದ್ದೆಯಲ್ಲಿರುವವನೊಬ್ಬ ತನ್ನ ರಾಜಕೀಯ ಒಲವುಗಳು ಕರ್ತವ್ಯದ ಮಧ್ಯೆ ಮೂಗು ತೂರದಂತೆ ನೋಡಿಕೊಳ್ಳುವುದಲ್ಲದೆ, ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಆ ವ್ಯಾಪ್ತಿಯಲ್ಲಿನ ಮುಖಂಡರ ಗಮನ ಸೆಳೆಯಲೇ ಬೇಕಾಗುತ್ತದೆ. ಆದರೆ ಈತ ತಾನೇನೋ ತಪ್ಪು ಮಾಡಿ ಸಿಕ್ಕಿಕೊಂಡಾಗ ಅದರ ಪರಿಣಾಮದಿಂದ ತಪ್ಪಿಸಿಕೊಳ್ಳಲು ಈ "ರಾಜಕೀಯ" ಎಂಬ ರಕ್ಷಣೋಪಾಯ ಕಲ್ಪಿಸಿಕೊಂಡಿದ್ದಾರೆಂಬ ಅರ್ಥವೇ ಹೆಚ್ಚು ಸಮಂಜಸವಾಗಿ ಕಾಣುತ್ತದೆ. ಇದನ್ನು ಹೇಳಿದಾಗ ಅವರೂ ಒಪ್ಪಿಕೊಂಡರು!

ಒಟ್ಟಿನಲ್ಲಿ ರಾಜಕೀಯವೋ, ನಿರ್ಲಕ್ಷ್ಯವೋ, ಅವ್ಯವಹಾರವೋ—ಅಂತೂ ಈ ಇಬ್ಬರು (ಈತ ಮತ್ತು ಬಿಡಿಒ) ಜವಾಬ್ದಾರಿಯುತ ಅಧಿಕಾರಿಗಳು ಸ್ವಲ್ಪವಾದರೂ ಈ ಯೋಜನೆಯ ಬಗ್ಗೆ ಲಕ್ಷ್ಯ ಇಟ್ಟಿದ್ದರೆ ಅದನ್ನು ನಷ್ಟ ಮತ್ತು ವಿಫಲತೆಯ ದಿಕ್ಕಿನಿಂದ ಕಾಪಾಡಿ ಉದ್ದೇಶಿತ ಗುರಿಯೆಡೆಗೆ ನಡೆಸಬಲ್ಲ ಮಾರ್ಗ ಮಾತ್ರ ಖಂಡಿತ ಇತ್ತು. ಅದು ಈಗಲೂ ಇದೆ.

ಇಲ್ಲಿನ ಫಲಾನುಭವಿಗಳು ಅತ್ಯಂತ ಉತ್ಸಾಹಿಗಳೂ, ಸಾಕಷ್ಟು ನಿಷ್ಠಾವಂತರೂ ಆಗಿದ್ದಾಗ್ಯೂ, ಶೆಡ್ಡಿನಿಂದೀಚೆಗಿನ ಪ್ರತಿಯೊಂದು ಹೆಜ್ಜೆಗೂ ಅವರು ಈ ಇಬ್ಬರು ಅಧಿಕಾರಿಗಳ ಕೈಯನ್ನೇ ಕಾಯಬೇಕಾಗಿರುವುದರಿಂದ ಅವನ್ನು ಯಾವ ರೀತಿಯಲ್ಲೂ ದೂರಿ ಪ್ರಯೋಜನವಿಲ್ಲ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚು ಕೂಟ, ಕೊಪ್ಪ.